# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 540
2. ಸದಸ್ಯರ ಹೆಸರು : ಡಾ॥ ತೇಜಸ್ವಿನಿ ಗೌಡ
3. ಉತ್ತರಿಸಬೇಕಾದ ದಿನಾಂಕ : 16-12-2021

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ರಾಮನಗರ ಜಿಲ್ಲೆಯ ಕನಕಪುರ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುವ ಮೇಕೆದಾಟು ಯೋಜನೆಯ ಪ್ರಸ್ತುತ ಸ್ಥಿತಿಗತಿ ಏನು; (ಮಾಹಿತಿ ಒದಗಿಸುವುದು) | ಮೇಕೆದಾಟು ಸಮತೋಲನ ಜಲಾಶಯ ಹಾಗೂ ಕುಡಿಯುವ ನೀರಿನ ಯೋಜನೆಯನ್ನು ಕಾವೇರಿ ನದಿಗೆ ಅಡ್ಡಲಾಗಿ ಅರ್ಕಾವತಿ ಹಾಗೂ ಕಾವೇರಿ ನದಿಯ ಸಂಗಮದ ಸಮೀಪದಲ್ಲಿ ನಿರ್ಮಿಸಿ, 67.16 ಟಿ.ಎಂ.ಸಿ ನೀರನ್ನು ಶೇಖರಿಸಲು ರೂ.9000.00 ಕೋಟಿ ಮೊತ್ತದ ಡಿ.ಪಿ.ಆರ್. ತಯಾರಿಸಲಾಗಿದೆ.<br><br>**ಈ ಯೋಜನೆಯ ವಿವರಗಳು ಕೆಳಗಿನಂತಿದೆ:**<br>✓ ಈ ಯೋಜನೆಯ Pre-Feasibility Report (PFR) ಅನ್ನು ಅನುಮೋದನೆ ಕೋರಿ ಕೇಂದ್ರ ಜಲ ಆಯೋಗ, ನವದೆಹಲಿಗೆ ದಿನಾಂಕ:04.08.2018 ರಂದು ಸಲ್ಲಿಸಲಾಗಿತ್ತು.<br>✓ ಕೇಂದ್ರ ಜಲ ಆಯೋಗದ ದಿನಾಂಕ:22.11.2018 ರ ಪತ್ರದಲ್ಲಿ ಸದರಿ ಯೋಜನೆಯ ವಿವರವಾದ ಯೋಜನಾ ವರದಿಯನ್ನು ತಯಾರಿಸಲು ಅನುಮೋದನೆ ನೀಡಿದೆ.<br>✓ ಈ ಯೋಜನೆಯ ವಿವರವಾದ ಯೋಜನಾ ವರದಿಯನ್ನು ರೂ.9000.00 ಕೋಟಿ ಮೊತ್ತಕ್ಕೆ ತಯಾರಿಸಿ ದಿನಾಂಕ:18.01.2019 ರಂದು ಕೇಂದ್ರ ಜಲ ಆಯೋಗದ ಅನುಮೋದನೆ ಕೋರಿ ಸಲ್ಲಿಸಲಾಗಿದ್ದು, ವಿವಿಧ ನಿರ್ದೇಶನಾಲಯಗಳ ಪರಿಶೀಲನೆಯಲ್ಲಿದೆ.<br>✓ ಯೋಜನೆಗೆ ಅವಶ್ಯವಿರುವ Environmental Impact Assessment (EIA) & Environmental Management Plan (EMP) ವರದಿಗಳನ್ನು ತಯಾರಿಸಲು Terms of Reference (TOR) ಅರ್ಜಿಯನ್ನು ದಿನಾಂಕ:20.06.2019 ಹಾಗೂ ಹೆಚ್ಚುವರಿ ಮಾಹಿತಿಗಳನ್ನು ದಿನಾಂಕ:04.10.2019 ರಂದು ಪರಿಸರ ಅರಣ್ಯ ಮತ್ತು ಹವಾಮಾನ ಬದಲಾವಣೆಯ ಸಚಿವಾಲಯದ (MoEF & CC) ಅಂತರ್ಜಾಲದಲ್ಲಿ ಅಪ್‌ಲೋಡ್ ಮಾಡಲಾಗಿದ್ದು, ಅನುಮೋದನೆ ನಿರೀಕ್ಷಿಸಲಾಗಿದೆ. |
| ಆ | 'ಮೇಕೆದಾಟು' ಯೋಜನೆಯ ಉದ್ದೇಶ ಹಾಗೂ ಇದರಿಂದ ರಾಜ್ಯದ ಜನತೆಗೆ ಆಗುವ ಉಪಯುಕ್ತತೆ ಏನು ; (ಮಾಹಿತಿ ನೀಡುವುದು). | **ಮೇಕೆದಾಟು ಯೋಜನೆಯ ಪ್ರಮುಖ ಉದ್ದೇಶಗಳು ಕೆಳಕಂಡಂತಿರುತ್ತದೆ :**<br>• ಕಾವೇರಿ ನ್ಯಾಯಾಧೀಕರಣದ ದಿನಾಂಕ:05-02-2007 ರ ಅಂತಿಮ ತೀರ್ಪನ್ನು ಗೌರವಾನ್ವಿತ ಸರ್ವೋಚ್ಚ ನ್ಯಾಯಾಲಯದ ದಿನಾಂಕ:16-02-2018 ರ ಆದೇಶದಲ್ಲಿ ಮಾರ್ಪಡಿಸಿರುವಂತೆ ತಮಿಳುನಾಡು ರಾಜ್ಯಕ್ಕೆ ಸಾಮಾನ್ಯ ಮಳೆ ವರ್ಷದಲ್ಲಿ 177.25 ಟಿ.ಎಂ.ಸಿ. ನೀರನ್ನು ಮಾಸಿಕವಾರು ನಿಯಂತ್ರಿಸಲು.<br>• ಸರ್ವೋಚ್ಚ ನ್ಯಾಯಾಲಯದಿಂದ ಹಂಚಿಕೆಯಾಗಿರುವ 4.75 ಟಿ.ಎಂ.ಸಿ. (consumptive use) ನೀರನ್ನು ಬೆಂಗಳೂರು ನಗರವೂ ಸೇರಿದಂತೆ ಕುಡಿಯುವ ಹಾಗೂ ಗೃಹೋಪಯೋಗಿ ಉದ್ದೇಶಕ್ಕೆ ಉಪಯೋಗಿಸಿಕೊಳ್ಳಲು.<br>• 400 ಮೆಗಾವ್ಯಾಟ್ ವಿದ್ಯುತ್‌ಅನ್ನು ಉತ್ಪಾದಿಸಲು. |
| ಇ | 'ಮೇಕೆದಾಟು' ಯೋಜನೆಯ ಶೀಘ್ರ ಜಾರಿಗೆ ಇರುವ ಅಡೆತಡೆ ಯಾವುವು; ಕಾನೂನಿನ ತೊಡಕುಗಳೇನಾದೂ | **ಸದರಿ ಯೋಜನೆಗೆ ಬೇಕಾದ ತೀರುವಳಿಗಳು :-**<br>i. ಸದರಿ ವಿವರವಾದ ಯೋಜನಾ ವರದಿಯು ಕೇಂದ್ರ ಜಲ ಆಯೋಗದ ವಿವಿಧ ನಿರ್ದೇಶನಾಲಯಗಳ ತೀರುವಳಿ ಅಗತ್ಯವಿರುತ್ತದೆ.<br>ii. ಕೇಂದ್ರ ಜಲ ಆಯೋಗ, ನವದೆಹಲಿ ರವರು ಸದರಿ ಯೋಜನೆಯ ಕುರಿತು |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
| --- | --- | --- |
| | ಇವೆಯೇ; ರಾಜ್ಯದ ಪರವಾಗಿ ಯಾವ ರೀತಿ ಯಾರು ವಾದ ಮಂಡಿಸುತ್ತಿದ್ದಾರೆ; ಇದಕ್ಕೆ ತಗುಲಿರುವ ವೆಚ್ಚವೆಷ್ಟು; | Cauvery Water Management Authority ರವರ ಅಭಿಪ್ರಾಯ ಕೋರಿದೆ;<br><br>iii. ಯೋಜನೆಗೆ ಅವಶ್ಯವಿರುವ Environmental Impact Assessment (EIA) & Environmental Management Plan (EMP) ವರದಿಗಳನ್ನು ತಯಾರಿಸಲು Terms of Reference (ToR) ಅರ್ಜಿಗೆ ಪರಿಸರ ಅರಣ್ಯ ಮತ್ತು ಹವಾಮಾನ ಬದಲಾವಣೆಯ ಸಚಿವಾಲಯದ (MoEF & CC) ಅನುಮೋದನೆ ನಿರೀಕ್ಷಿಸಲಾಗಿದೆ.<br><br>iv. ಪ್ರಸ್ತಾಪಿತ ಯೋಜನೆಗೆ ವನ್ಯಜೀವಿ, ಅರಣ್ಯ ಹಾಗೂ ಪರಿಸರದ ಶಾಸನಬದ್ಧ ತೀರುವಳಿಗಳ ಅವಶ್ಯವಿರುತ್ತದೆ.<br><br>v. **ಮಿಸ್ಸಲೇನಿಯಸ್ ಅರ್ಜಿ ಸಂ. 3127/2018 :** ಮೇಕೆದಾಟು ಯೋಜನೆಯ ವಿಸ್ತೃತ ಯೋಜನಾ ವರದಿಯನ್ನು ಸಿದ್ಧಪಡಿಸಲು ಕರ್ನಾಟಕಕ್ಕೆ ಅನುಮತಿ ನೀಡಿರುವ ದಿ:22.11.2018 ರ ಪತ್ರವನ್ನು ಅನುಷ್ಠಾನಗೊಳಿಸದಂತೆ ಪ್ರಾರ್ಥಿಸಿ ತಮಿಳುನಾಡು ಸರ್ಕಾರದವರು ದಿನಾಂಕ:30.11.2018 ರಂದು ಸರ್ವೋಚ್ಚ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿದೆ. ಪ್ರಕರಣವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಬಾಕಿಯಿರುತ್ತದೆ. ಸರ್ವೋಚ್ಚ ನ್ಯಾಯಾಲಯವು ಯಾವುದೇ ತಡೆಯಾಜ್ಞೆ ನೀಡಿರುವುದಿಲ್ಲ.<br><br>vi. **ಮಿಸ್ಸಲೇನಿಯಸ್ ಅರ್ಜಿ ಡೈರಿ ನಂ. 20271/2021 :** ರಾಜ್ಯ ಸರ್ಕಾರವು ಅನುಮೋದನೆಗಾಗಿ ಸಲ್ಲಿಸಿರುವ ಮೇಕೆದಾಟು ಯೋಜನೆಯ ವಿಸ್ತೃತ ಯೋಜನಾ ವರದಿಯನ್ನು ತಿರಸ್ಕರಿಸುವಂತೆ ಕೇಂದ್ರ ಜಲ ಆಯೋಗಕ್ಕೆ ನಿರ್ದೇಶನ ನೀಡಬೇಕೆಂದು ಹಾಗೂ ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಇಲಾಖೆಯು ಯಾವುದೇ ತೀರುವಳಿಗಳನ್ನು ನೀಡದಂತೆ ಕೇಂದ್ರ ಪರಿಸರ ಹಾಗೂ ಅರಣ್ಯ ಇಲಾಖೆಗೆ ನಿರ್ದೇಶನ ನೀಡಬೇಕೆಂದು ಪ್ರಾರ್ಥಿಸಿ ತಮಿಳುನಾಡು ಸರ್ಕಾರದವರು ದಿ: 27.08.2021 ರಂದು ಸರ್ವೋಚ್ಚ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿದೆ.<br><br>vii. **ಸಿವಿಲ್ ಅರ್ಜಿ ಸಂಖ್ಯೆ:5608/2021 :** ಮೇಕೆದಾಟು ಪ್ರಕರಣವು ಸರ್ವೋಚ್ಚ ನ್ಯಾಯಾಲಯದ ಮುಂದೆ ಈಗಾಗಲೇ ಇರುವುದರಿಂದ ರಾಷ್ಟ್ರೀಯ ಹಸಿರು ನ್ಯಾಯಮಂಡಳಿಯ ಪೀಠದ ಸ್ವಯಂಪ್ರೇರಿತ ಪ್ರಕ್ರಿಯೆಯನ್ನು ಮುಂದುವರಿಸುವ ಅಗತ್ಯವಿಲ್ಲ ಎಂದು ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಮಂಡಳಿಯು ದಿನಾಂಕ:17-06-2021 ರಂದು ಆದೇಶಿಸಿ ಸದರಿ ಪ್ರಕರಣದ ವಿಚಾರಣೆಯನ್ನು ಮುಕ್ತಾಯಗೊಳಿಸಿದ ಆದೇಶದ ವಿರುದ್ಧ ತಡೆಯಾಜ್ಞೆ ನೀಡುವಂತೆ ಪ್ರಾರ್ಥಿಸಿ ತಮಿಳುನಾಡು ಸರ್ಕಾರದವರು ದಿನಾಂಕ:11.08.2021 ರಂದು ಸರ್ವೋಚ್ಚ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿದೆ.<br><br>ಸದರಿ ಅರ್ಜಿಗೆ ಕರ್ನಾಟಕ ರಾಜ್ಯದ ಪರವಾಗಿ ಕೇವಿಯಟ್‌ನ್ನು ಸಲ್ಲಿಸಲಾಗಿದೆ. ಪ್ರಕರಣವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಬಾಕಿಯಿರುತ್ತದೆ.<br><br>viii. ಮೇಕೆದಾಟು ಪ್ರಕರಣವು ಸರ್ವೋಚ್ಚ ನ್ಯಾಯಾಲಯದ ಮುಂದೆ ಹಲವು ಬಾರಿ ವಿಚಾರಣೆಗೆ ಬಂದಿದ್ದು, ಮಾನ್ಯ ಅಡ್ವೊಕೇಟ್ ಜನರಲ್ ಹಾಗೂ ಹಿರಿಯ ವಕೀಲರು / ವಕೀಲರ ತಂಡವು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ರಾಜ್ಯವನ್ನು ಪ್ರತಿನಿಧಿಸುತ್ತಿದ್ದಾರೆ.<br><br>ವಿವಿಧ ನ್ಯಾಯಾಲಯಗಳಲ್ಲಿನ ಪ್ರಕರಣಗಳಿಗಾಗಿ ಇಲ್ಲಿಯವರೆಗೂ ರೂ.11,90,000/- ಗಳನ್ನು (ರೂಪಾಯಿ ಹನ್ನೊಂದು ಲಕ್ಷ ತೊಂಬತ್ತು ಸಾವಿರ |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| | | ಮಾತ್ರ) ವೆಚ್ಚ ಮಾಡಲಾಗಿದೆ. |
| ಈ | 'ಮೇಕೆದಾಟು' ಯೋಜನೆ ಯಾರ ಕಾಲದಲ್ಲಿ ರೂಪಿತವಾಯಿತು; ಹಿಂದಿನ ಸರ್ಕಾರಗಳ ಕಾಲದಿಂದಲೂ ಯಾವ ಯಾವ ರೀತಿಯ ಪ್ರಯತ್ನ ಮಾಡಲಾಗಿದೆ; (ಮುನ್ನಡೆ ಹಿನ್ನಡೆ ಅಂಕಿ ಅಂಶ ಸಹಿತ ಮಾಹಿತಿ ನೀಡುವುದು) | 1. ಮೇಕೆದಾಟು ಮತ್ತು ಶಿವನಸಮುದ್ರ ಜಲ ವಿದ್ಯುತ್ ಯೋಜನೆಗಳ ವರದಿ ಬಗ್ಗೆ ದಿನಾಂಕ:10.09.2013 ರಂದು ಮಾನ್ಯ ಜಲಸಂಪನ್ಮೂಲ ಸಚಿವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯಲ್ಲಿ ಮೇಕೆದಾಟು ಯೋಜನೆಗೆ ಜಲಸಂಪನ್ಮೂಲ ಇಲಾಖೆಯಿಂದ ವಿವರವಾದ ಯೋಜನಾ ವರದಿಯನ್ನು ತಯಾರಿಸಲು ವ್ಯವಸ್ಥಾಪಕ ನಿರ್ದೇಶಕರು, ಕಾವೇರಿ ನೀರಾವರಿ ನಿಗಮ, ರವರಿಗೆ ನಿರ್ದೇಶನ ನೀಡಲಾಗಿದೆ.<br>2. ಅದರಂತೆ ದಿನಾಂಕ:30.11.2014 ರಲ್ಲಿ Global expression of interest ಅನ್ನು ಆಹ್ವಾನಿಸಲಾಗಿತ್ತು. ಈ ಸಂಬಂಧ ಬಿಡ್ಡುದಾರರು ಅತಿ ಹೆಚ್ಚಾಗಿ ದರವನ್ನು ನಮೂದಿಸಿದ್ದು, ದಿನಾಂಕ:25.11.2015 ರಂದು ನಡೆದ ಕಾವೇರಿ ನೀರಾವರಿ ನಿಗಮದ ಮಂಡಳಿಯ 53ನೇ ಸಭೆಯಲ್ಲಿ ಪ್ರಸ್ತಾವನೆಯನ್ನು ತಿರಸ್ಕರಿಸಲಾಗಿದೆ.<br>3. ಸರ್ಕಾರದ ಆದೇಶ ದಿನಾಂಕ:13-03-2017 ರಲ್ಲಿ ರೂ.5912.00 ಕೋಟಿ ಮೊತ್ತದ ಯೋಜನಾ ಅಂದಾಜಿಗೆ ತಾತ್ವಿಕ ಅನುಮೋದನೆ ನೀಡಲಾಗಿತ್ತು.<br>4. ಯೋಜನೆಯ Pre-Feasibility Report (PFR) ಅನ್ನು ಅನುಮೋದನೆ ಕೋರಿ ಕೇಂದ್ರ ಜಲ ಆಯೋಗಕ್ಕೆ ದಿನಾಂಕ:04.08.2018 ರಂದು ಸಲ್ಲಿಸಲಾಗಿತ್ತು.<br>5. ಸದರಿ ವರದಿಯನ್ನು ಪರಿಶೀಲಿಸಿ ಕೇಂದ್ರ ಜಲ ಆಯೋಗವು ದಿನಾಂಕ:22.11.2018 ರ ಪತ್ರದಲ್ಲಿ ಯೋಜನೆಯ ವಿವರವಾದ ಯೋಜನಾ ವರದಿಯನ್ನು ತಯಾರಿಸಲು ಅನುಮೋದನೆ ನೀಡಿದೆ.<br>6. ವಿವರವಾದ ಯೋಜನಾ ವರದಿಯನ್ನು ರೂ.9000.00 ಕೋಟಿ ಮೊತ್ತಕ್ಕೆ ತಯಾರಿಸಿ ದಿನಾಂಕ:18.01.2019 ರಂದು ಕೇಂದ್ರ ಜಲ ಆಯೋಗಕ್ಕೆ ಸಲ್ಲಿಸಲಾಗಿದೆ.<br>7. ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ರವರು ಸನ್ಮಾನ್ಯ ಪ್ರಧಾನ ಮಂತ್ರಿಯವರಿಗೆ ಬರೆದ ದಿನಾಂಕ:30-04-2015 ಮತ್ತು 27-12-2018 ರ ಪತ್ರಗಳಲ್ಲಿ ಮೇಕೆದಾಟು ಯೋಜನೆಗೆ ಸಂಬಂಧಿಸಿದಂತೆ ಮೆಮೊರಂಡಮ್ ಸಲ್ಲಿಸಿ, ಯೋಜನೆಗೆ ಅವಶ್ಯವಿರುವ ಅನುಮೋದನೆ / ತೀರುವಳಿಗಳನ್ನು ನೀಡುವಂತೆ ಕೋರಲಾಗಿತ್ತು.<br>8. ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ರವರು ಮಾನ್ಯ ಸಚಿವರು, ಜಲ ಶಕ್ತಿ ಮಂತ್ರಾಲಯ, ಭಾರತ ಸರ್ಕಾರ ಇವರಿಗೆ ದಿನಾಂಕ: 15-06-2019, 06-08-2019, 11-11-2019, 15-12-2019, 18-09-2020 ಮತ್ತು 25-08-2021 ರ ಪತ್ರಗಳಲ್ಲಿ ಕೇಂದ್ರ ಜಲ ಆಯೋಗದ ವಿವಿಧ ನಿರ್ದೇಶನಾಲಯಗಳ ಸಂಬಂಧಪಟ್ಟ ಅಧಿಕಾರಿಗಳಿಂದ ಅಗತ್ಯ ಅನುಮೋದನೆ ದೊರಕಿಸಿಕೊಡಲು ಕೋರಿರುತ್ತಾರೆ.<br>9. ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ರವರು ಸನ್ಮಾನ್ಯ ಮುಖ್ಯಮಂತ್ರಿಗಳು, ತಮಿಳುನಾಡು ಸರ್ಕಾರ ಇವರಿಗೆ ದಿನಾಂಕ:03-07-2021 ರ ಪತ್ರದಲ್ಲಿ ಮೇಕೆದಾಟು ಯೋಜನೆಗೆ ವಿರೋಧ ವ್ಯಕ್ತಪಡಿಸದಿರಲು ಕೋರಿರುತ್ತಾರೆ.<br>10. ಸನ್ಮಾನ್ಯ ಮುಖ್ಯ ಮಂತ್ರಿಗಳು, ಕರ್ನಾಟಕ ಸರ್ಕಾರ ರವರು ದಿನಾಂಕ:03.07.2021 ರಂದು ಸನ್ಮಾನ್ಯ ಪ್ರಧಾನ ಮಂತ್ರಿಗಳವರಿಗೆ, ಮಾನ್ಯ ಕೇಂದ್ರ ಜಲ ಶಕ್ತಿ ಸಚಿವರಿಗೆ ಹಾಗೂ ಮಾನ್ಯ ಕೇಂದ್ರ ಪರಿಸರ ಸಚಿವರಿಗೆ ಯೋಜನೆಗೆ ಅವಶ್ಯವಿರುವ Environmental Impact Assessment (EIA) & Environmental Management Plan (EMP) |

| ಕ್ರ ಸಂ | ಪ್ರಶ್ನೆಗಳು | ಉತ್ತರಗಳು |
| --- | --- | --- |
| | | ವರದಿಗಳನ್ನು ತಯಾರಿಸಲು Terms of Reference (TOR) ಗೆ ಕೇಂದ್ರ ಪರಿಸರ ಹಾಗೂ ಅರಣ್ಯ ಸಚಿವಾಲಯದ ಸಂಬಂಧಪಟ್ಟ ಅಧಿಕಾರಿಗಳಿಂದ ಅನುಮತಿ ದೊರಕಿಸಿಕೊಡಲು ಕೋರಿರುತ್ತಾರೆ.<br>11. ಮಾನ್ಯ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ ರವರು ಮಾನ್ಯ ಕಾರ್ಯದರ್ಶಿಗಳು, ಕೇಂದ್ರ ಜಲ ಶಕ್ತಿ ಮಂತ್ರಾಲಯ, ಭಾರತ ಸರ್ಕಾರ ಇವರಿಗೆ ದಿನಾಂಕ:19.11.2019 ಮತ್ತು 08.05.2020 ರ ಪತ್ರಗಳಲ್ಲಿ ಕೇಂದ್ರ ಜಲ ಆಯೋಗದ ವಿವಿಧ ನಿರ್ದೇಶನಾಲಯಗಳಿಗೆ ಪ್ರಸ್ತಾವನೆಗೆ ಅನುಮೋದನೆ ನೀಡುವಂತೆ ಸೂಚಿಸಲು ಕೋರಿರುತ್ತಾರೆ.<br>12. ಮಾನ್ಯ ಜಲಸಂಪನ್ಮೂಲ ಸಚಿವರು, ಕರ್ನಾಟಕ ಸರ್ಕಾರ ರವರು ದಿನಾಂಕ:03.07.2019, 25.02.2020, ದಿನಾಂಕ:14.07.2020 ಮತ್ತು 18.11.2020 ರ ಪತ್ರಗಳಲ್ಲಿ ಮೇಕೆದಾಟು ಯೋಜನೆಯ ವಿವರವಾದ ಯೋಜನಾ ವರದಿಗೆ ಕೇಂದ್ರ ಜಲ ಆಯೋಗದ ವಿವಿಧ ನಿರ್ದೇಶನಾಲಯಗಳಿಂದ ಅನುಮೋದನೆ ದೊರಕಿಸಿ ಕೊಡುವಂತೆ ಕೇಂದ್ರ ಸರ್ಕಾರದ ಮಾನ್ಯ ಜಲಶಕ್ತಿ ಸಚಿವರನ್ನು ಕೋರಿರುತ್ತಾರೆ. |
| ಉ | 'ಮೇಕೆದಾಟು' ಯೋಜನೆಯ ಅನುಷ್ಠಾನಕ್ಕಾಗಿ ತಗುಲಿರುವ ಯೋಜಿತ ವೆಚ್ಚವೆಷ್ಟು ? (ಕೇಂದ್ರ ಹಾಗೂ ರಾಜ್ಯದ ಪಾಲನ್ನು ಅಂಕಿ ಅಂಶ ಸಮೇತ ವಿವರಿಸುವುದು). | ಮೇಕೆದಾಟು ಯೋಜನೆಯ ಪೂರ್ವ ಕಾರ್ಯಸಾಧ್ಯತಾ ವರದಿ / ವಿವರವಾದ ಯೋಜನಾ ವರದಿಯನ್ನು ತಯಾರಿಸಲು ಇಲ್ಲಿಯವರೆಗೂ ರೂ.8.86 ಕೋಟಿ ಮೊತ್ತ ವೆಚ್ಚವಾಗಿದೆ. |

*ಸಂಖ್ಯೆ:ಜಸಂಇ 192 ಎನ್‌ಎಲ್‌ಎ 2021*

(ಗೋವಿಂದ ಎಂ. ಕಾರಜೋಳ)
ಜಲಸಂಪನ್ಮೂಲ ಸಚಿವರು